ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ




# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಇದು ಮೊದಲ ವರ್ಣರಂಜಿತ ಸಂಚಿಕೆ

ಸಂಪುಟ: ೦೩ ಸಂಚಿಕೆ: ೧ Vol. 03 Issue 1 | ಏಪ್ರಿಲ್ ೨೦೧೬ April 2016 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/- A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



ಚಂದಾ ವಿವರಗಳು
ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೮೭೭, ೨೬೬೭೬೭೭೩
ಇಮೇಲ್ :
bmsritrust@gmail.com
web: www.bmshri.org

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಫೆಬ್ರವರಿ2016-ಮಾರ್ಚ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

# ಪ್ರತಿಷ್ಠಾನದಲ್ಲಿ ಹಳಗನ್ನಡ ತರಗತಿಗಳು



26 ಫೆಬ್ರವರಿ 2016 ರಂದು, ಹಳಗನ್ನಡ ತರಗತಿಗಳನ್ನು ಪ್ರತಿಷ್ಠಾನದ ಅಧ್ಯಕ್ಷರ ಸಮ್ಮುಖದಲ್ಲಿ ಉದ್ಘಾಟನಾ ಸಮಾರಂಭವು ನೆರವೇರಿಸುವುದರ ಮೂಲಕ, ತರಗತಿಗಳೂ ಸಹ ಅಂದೇ ಪ್ರಾರಂಭಗೊಂಡಿತು. 36 ವಿದ್ಯಾರ್ಥಿಗಳು ಹಾಜರಿದ್ದರು ಮತ್ತು ಈ ತರಗತಿಗೆ ಪಾಠಗಳನ್ನು ಸಂಗ್ರಹವಾಡಿ ಸಿದ್ಧಪಡಿಸಿದ ವಿದ್ವಾಂಸರಾದ ಡಾ|| ಕೆ.ಆರ್.ಗಣೇಶ್‌ರವರೂ ಉಪಸ್ಥಿತ ರಿದ್ದರು. ಕಾರ್ಯಕ್ರಮಕ್ಕೆ ಪ್ರಾಸ್ತಾವಿಕ ನುಡಿ ಮತ್ತು ಸ್ವಾಗತವನ್ನು ಕೋರಿದ ಡಾ|| ಪಿ.ವಿ. ನಾರಾಯಣರವರು ಹಳಗನ್ನಡವನ್ನು ಉಳಿಸುವ, ಮತ್ತು ಮುಂದಕ್ಕೆ ಕೊಂಡೊಯ್ಯುವ ಕೆಲಸವನ್ನು ಪ್ರತಿಷ್ಠಾನ ಕಳೆದ ಹಲವಾರು ವರ್ಷಗಳಿಂದ ನಿರಂತರವಾಗಿ ನಡೆಸಿಕೊಂಡು ಬರುತ್ತಿದೆ ಮತ್ತು ಮುಂದೆಯೂ ನಡೆಸಿಕೊಂಡು ಬರುವ ಭರವಸೆ ನೀಡಿದರು.ಹಳಗನ್ನಡ ತರಗತಿಗಳು ಹಿಂದಿನ ಕವಿಗಳನ್ನು ಅರ್ಥ ಮಾಡಿಕೊಳ್ಳುವ ಮತ್ತು ಹಳಗನ್ನಡವನ್ನು ಪ್ರೀತಿಯಿಂದಲೇ ಅರಿಯುವ ಬಗೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಈಗಿನ ತರಗತಿಯಲ್ಲಿ ಆಯ್ದ ಪಾಠಗಳ ಸಂಗ್ರಹವಲ್ಲದೆ, ಶಾಸ್ತ್ರದ ವಿಚಾರಗಳನ್ನೊಗೊಂಡಂತೆ, ವ್ಯಾಕರಣ, ಛಂದೋಭಾಗದ ಲಕ್ಷಣಗಳನ್ನೂ ಪರಿಚಯಿಸುವ ತಿಳಿಯುವ ವಿಷಯಗಳನ್ನು ಭೋದಿಸುವುದಾಗಿ ಡಾ|| ಕೆ.ಆರ್.ಗಣೇಶ್ ಅವರು ತಿಳಿಸಿದರು.

## ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಕಾರ್ಯಚಟುವಟಿಕೆಗಳು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ ಸಂಶೋಧನಾ ಕೇಂದ್ರವು 2003-04ನೇ ಸಾಲಿನಲ್ಲಿ ಹಂಪಿ ವಿಶ್ವ ವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರವಾಗಿ ಸ್ಥಾಪನೆಯಾಯಿತು.ಅಲ್ಲಿಂದ ಇಲ್ಲಿಯವರೆಗೆ ಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ 10 ಜನ ವಿದ್ಯಾರ್ಥಿಗಳು ಪಿಎಚ್.ಡಿ ಅಧ್ಯಯನಮಾಡಿ ಪದವಿಯನ್ನು ಗಳಿಸಿರುತ್ತಾರೆ.

ಈ ತನಕ ಎಂ.ಫಿಲ್ ಅಧ್ಯಯನ ಮಾಡಿ ಸುಮಾರು 110 ಜನ ವಿದ್ಯಾರ್ಥಿಗಳು ಪದವಿಯೊಂದಿಗೆ ಪ್ರಮಾಣ ಪತ್ರವನ್ನು ಪಡೆದಿರುತ್ತಾರೆ. ಈಗಿನ ಸಂಯೋಜನಾಧಿಕಾರಿಯಾದ ಡಾ|| ವಿಜಯಾಸುಬ್ಬರಾಜ್ ಅವರ ನೇತೃತ್ವದಲ್ಲಿ ಅನುಭವಸ್ಥ ವಿದ್ವಾಂಸರಿಂದ ಎಂ.ಫಿಲ್ ಮತ್ತು ಪಿಎಚ್‌ಡಿ ಕೋರ್ಸ್ ನಡೆಯುತ್ತಿದ್ದು, 2014-15ನೇ ಸಾಲಿನಲ್ಲಿ ಎಂ.ಫಿಲ್ 8 ಜನ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದು ದಿನಾಂಕ: 10-3-2016 ರಂದು ಹಂಪಿಯಲ್ಲಿ ನಡೆದ ಘಟಿಕೋತ್ಸವದಲ್ಲಿ ಪ್ರಮಾಣ ಪತ್ರವನ್ನು ಪಡೆದಿರುತ್ತಾರೆ.

ಇದೇ ರೀತಿ 2015-16ನೇ ಶೈಕ್ಷಣಿಕ ಸಾಲಿನಲ್ಲಿ ನಡೆಯುವ ಕನ್ನಡ ಎಂ.ಫಿಲ್ ಪದವಿ ಅಧ್ಯಯನಕ್ಕೆ ಅರ್ಜಿಯನ್ನು 10-7-2015 ರೊಳಗೆ ಸಲ್ಲಿಸುವಂತೆ ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಹಂಪಿಯ ವೆಬ್‌ಸೈಟ್ (www.kannadauniversity.org) ನಲ್ಲಿ ಪ್ರಕಟವಾದಂತೆ ಹಾಗೂ ಪ್ರತಿಷ್ಠಾನದ ಸೂಚನಾ ಫಲಕದಲ್ಲಿ ಪ್ರಕಟಿಸಿದಂತೆ ಮತ್ತು ಪತ್ರಿಕಾ ಪ್ರಕಟಣೆಯಂತೆ ದಿನಾಂಕ 20-8-2015ರಿಂದ ತರಗತಿಗಳು ಪ್ರಾರಂಭವಾಗಿ 31-12-15 ರಂದು ತರಗತಿಗಳು ಮುಕ್ತಾಯವಾದವು. ಜನವರಿ ತಿಂಗಳಿನಲ್ಲಿ ಹಂಪಿ ವಿಶ್ವವಿದ್ಯಾಲಯದಲ್ಲಿ ಪರೀಕ್ಷೆಯು ನಡೆಯಿತು. ಈ ಸಾಲಿನಲ್ಲಿ ಪರೀಕ್ಷೆಯಲ್ಲಿ ಹಾಜರಾದ ಎಲ್ಲಾ 8 ವಿದ್ಯಾರ್ಥಿಗಳೂ ಉನ್ನತ ದರ್ಜೆಯಲ್ಲಿ ತೇರ್ಗಡೆಯಾಗಿದ್ದಾರೆ.

## ಸಂಪಾದಕೀಯ

ಹೊಂಗನಸು ಪ್ರಾರಂಭಗೊಂಡು 14 ತಿಂಗಳುಗಳಾಗಿರುತ್ತವೆ. ಈ ಸಂಚಿಕೆಯಿಂದ ಇದನ್ನು ಇನ್ನೂ ಹೆಚ್ಚು ಆಕರ್ಷಕವಾಗಿ ವರ್ಣಮಯವಾಗಿ ನಿಮ್ಮ ಮುಂದಿಡಲು ನಮಗೆ ಹೆಮ್ಮೆಯೆನಿಸುತ್ತಿದೆ. ಜೊತೆಗೆ ಇದರ ಆಕಾರವನ್ನೂ ಸ್ವಲ್ಪ ವಿಸ್ತೃತಗೊಳಿಸಿ ನಿಮಗೆ ಇನ್ನೂ ಹೆಚ್ಚಿನ ವಿವರಗಳನ್ನು ನೀಡಲಾಗುತ್ತಿದೆ. ನಿಮ್ಮ ಸಲಹೆ ಸೂಚನೆಗಳನ್ನು ನೀಡಿದಲ್ಲಿ ನಮಗೆ ಸಹಾಯವಾಗುತ್ತದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳು ಹೆಚ್ಚು ವೈವಿಧ್ಯಮಯವಾಗುತ್ತಿವೆ. ಪ್ರತಿ ತಿಂಗಳೂ ನಡೆಸುತ್ತಿರುವ ಕಾರ್ಯಕ್ರಮಗಳ ಸಂಖ್ಯೆಯೂ ಹೆಚ್ಚುತ್ತಿವೆ. ಇದೆಲ್ಲವೂ ಸಾಧ್ಯವಾಗುತ್ತಿರುವುದು ನಿಮ್ಮೆಲ್ಲರ ಸಹಕಾರದಿಂದ ಮಾತ್ರ. ನಮ್ಮ ಈ ಎಲ್ಲಾ ಚಟುವಟಿಕೆಗಳಲ್ಲಿ ನಿಮ್ಮ ಭಾಗವಹಿಕೆ ಹೆಚ್ಚಿ ನಮಗೆ ಹೆಚ್ಚು ಪ್ರೋತ್ಸಾಹ ದೊರಕಬೇಕೆಂದು ಆಶಿಸುತ್ತೇವೆ.

ಹೊಂಗನಸು ಹೆಚ್ಚು ಆಕರ್ಷಕವಾಗಿ ವರ್ಣಮಯವಾಗಿದ್ದರೂ ಹಾಗೂ ಅದನ್ನು ಮುದ್ರಿಸುವ ವೆಚ್ಚ ಹೆಚ್ಚಾಗಿದ್ದರೂ ಚಂದಾ ದರವನ್ನು ಹೆಚ್ಚಿಸಿರುವುದಿಲ್ಲ. ಎಲ್ಲಾ ಓದುಗರೂ ಹೊಂಗನಸು ಪತ್ರಿಕೆಯ ಚಂದಾದಾರರಾಗಬೇಕೆಂದು ನಮ್ಮ ಆಶಯವಾಗಿದೆ. ಈಗಾಗಲೇ ಅರ್ಧಕ್ಕೂ ಹೆಚ್ಚು ಸದಸ್ಯರು ಚಂದಾದಾರರಾಗಿರುತ್ತರೆ. ಉಳಿದ ಸದಸ್ಯರೂ ಆದಷ್ಟೂ ಬೇಗನೆ ಚಂದಾದಾರರಾಗಬೇಕೆಂದು ಕೋರುತ್ತೇವೆ. ಜೊತೆಗೆ ನಿಮ್ಮ ಬಂಧು ಮಿತ್ರರೂ ಹಾಗೂ ಇತರ ಸಾಹಿತ್ಯಸಕ್ತರೂ ಚಂದಾದಾರರಾದಲ್ಲಿ ಇನ್ನೂ ಹೆಚ್ಚಿನ ಪ್ರತಿಗಳನ್ನು ಮುದ್ರಿಸಲು ಸಹಕಾರಿಯಾಗುತ್ತದೆ. ನಿಮ್ಮ ಸಹಕಾರವನ್ನು ಎದುರು ನೋಡುತ್ತಿದ್ದೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

### ಏಪ್ರಿಲ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಇ. ಪಿ. ರೈಸ್ | 26–4–1849 |
| ಆರ್. ನರಸಿಂಹಚಾರ್ | 9–4–1861 |
| ತಿರುಮಲೆತಾತಾಚಾರ್ಯ ಶರ್ಮಾ | 27–4–1895 |
| ಆನಂದಕಂದ | |
| ಬೇಟಗೇರಿ ಕೃಷ್ಣಶರ್ಮಾ | 16–4–1900 |
| ಬೀಚಿ (ರಾಯಸಂ ಭೀಮಸೇನರಾವ್) | 23–4–1913 |
| ತರಾಸು | 21–4–1920 |
| ಶಾಂತರಸ | 4–4–1929 |
| ಫೆರ್ಡಿನಾಂಡ್ ಕಿಟೆಲ್ | 8–4–1832 |

### ಏಪ್ರಿಲ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ತರಾಸು | 10–4– 1984 |
| ಭಾರತಿ ಸುತ (ಎಸ್ ಎಲ್ ನಾರಾಯಣರಾವ್) | 4–4– 1976 |
| ಗಳಗನಾಥರು | 22–4–1942 |
| ಎಂ.ಎಸ್. ಪುಟ್ಟಣ್ಣ | 11–4–1930 |
| ವಿಕೃ ಗೋಕಾಕ್ | 28–4–1992 |

### ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

'ಅಣ್ಣಅಣ್ಣ' ಎಂದು ಕೈ ಮುಗಿಯುವರು
'ಅನ್ನ''ಅನ್ನ' ಎಂದು ಕೈಯೊಡ್ಡುವರು
'ಅನ್ನ' ಹಾಕಲು ಕೈಚಾಚಿದರೆ
ಮನೆಗೇ ಕನ್ನ ಹಾಕುವರು
ಇಂಥ ಕನ್ನಿಂಗುಗಳಿಗೆ
ತಿಳಿಹೇಳೋ "ಅಲ್ಲರಖಾ". ॥5॥

ಶ್ರದ್ಧಾಂಜಲಿ

### ಶ್ರೀ ಹೆಚ್.ಎಸ್. ರೇಣುಕಾಪ್ರಸಾದ್



ಪ್ರಸಿದ್ಧ ವಕೀಲರಾದ ಎಚ್.ಎಸ್.ರೇಣುಕಾಪ್ರಸಾದ್ (84) ಚಿರನಿದ್ರೆಗೆ ಜಾರಿದ್ದಾರೆ. ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್ ಅವರ ಪತಿ ಎಚ್.ಎಸ್. ರೇಣುಕಾಪ್ರಸಾದ್ ಅವರು. ಇವರ ತಂದೆ ಪಂಡಿತ ಬಿ.ಶಿವಮೂರ್ತಿ ಶಾಸ್ತ್ರಿಯವರು ಮೈಸೂರು ಮಹಾಸಂಸ್ಥಾನದ ರಾಜಮನೆತನದಲ್ಲಿ ವಿದ್ವಾಂಸರಾಗಿದ್ದರು. ಇವರ ಸಹೋದರ ಎಚ್.ಎಸ್.ಶಿವಪ್ರಕಾಶ್ ಅವರು ಪ್ರಸಿದ್ಧ ಸಾಹಿತಿಗಳಾಗಿದ್ದಾರೆ.

ಖ್ಯಾತ ವಕೀಲರಾಗಿದ್ದ ಎಚ್.ಎಸ್. ರೇಣುಕಾಪ್ರಸಾದ್ ಅವರು ಸಾಹಿತ್ಯ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಅಪಾರ ಆಸಕ್ತಿ ಹೊಂದಿದ್ದರು. ಕರ್ನಾಟಕ ನೋಟರಿ ಸಂಘ, ಬಸವ ಸಮಿತಿ, ಕರ್ನಾಟಕ ವೀರಶೈವ ಸಂಘ, ಕರ್ನಾಟಕ ವಕೀಲರ ಸಂಘ ಮತ್ತಿತರ ಪ್ರತಿಷ್ಠಿತ ಸಂಸ್ಥೆಗಳ ಅಧ್ಯಕ್ಷರಾಗಿ, ಅಖಿಲ ಭಾರತ ವೀರಶೈವ ಮಹಾಸಭಾದ ಉಪಾಧ್ಯಕ್ಷರಾಗಿ ಅವರು ಕಾರ್ಯ ನಿರ್ವಹಿಸಿದ್ದರು. ಇಳಿ ವಯಸ್ಸಿನಲ್ಲೂ ಸಕ್ರಿಯವಾಗಿ ಸಮಾಜದ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು.

### ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಕೊಡಮಾಡುವ ವಾರ್ಷಿಕ ಪ್ರಶಸ್ತಿಗಳು

| ತಿಂಗಳು | ಪ್ರಶಸ್ತಿಗಳು | ಮೊಬಲಗು ರೂ. ಗಳಲ್ಲಿ |
|---|---|---|
| ಜನವರಿ | ಶ್ರೀ ಸಾಹಿತ್ಯ ಪ್ರಶಸಿ | ಒಂದು ಲಕ್ಷ |
| ಏಪ್ರಿಲ್ | ವಿಜಯ ಸುಬ್ಬರಾಜ್ ಸಾಹಿತ್ಯ ಪುರಸ್ಕಾರ | ಹತ್ತು ಸಾವಿರ |
| ಮೇ | ಸೂವೆಂ ಅರಗ ಪ್ರಶಸ್ತಿ | ಹತ್ತು ಸಾವಿರ |
| ಸೆಪ್ಟೆಂಬರ್ | ಸಾವಿತ್ರಮ್ಮ ಎಂವಿಸಿ ಪುರಸ್ಕಾರ | ಮೂವತ್ತು ಸಾವಿರ |
| ಅಕ್ಟೋಬರ್ | ಶಾ. ಬಾಲೂ ರಾವ್‌ಅನುವಾದ ಪ್ರಶಸ್ತಿ | ಇಪ್ಪತ್ತೈದು ಸಾವಿರ |
| | ಶಾ. ಬಾಲೂ ರಾವ್‌ಯುವ ಬರಹಗಾರ ಪ್ರಶಸ್ತಿ | ಇಪ್ಪತ್ತೈದು ಸಾವಿರ |



*ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.*

# ಏಪ್ರಿಲ್ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**5–4–2016 –ಮಂಗಳವಾರ ಸಂಜೆ 6–00 ಗಂಟೆ**

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ –** ಸಾಕ್ಷ್ಯ ಚಿತ್ರಗಳ ಪ್ರದರ್ಶನ

**06–04–2016 ಬುಧವಾರ ಸಂಜೆ 6 ಗಂಟೆ**



**ಗಮಕ ವಾಹಿನಿ ಕಾರ್ಯಕ್ರಮ ಮಾಲೆ –3**

ಗಮಕ ರೂಪಕ: ಕೆ ರಾಮಸ್ವಾಮಿ ಅಯ್ಯಂಗಾರ್ ವಿರಚಿತ "ಭರತ ಭಕ್ತಿ ಕಾವ್ಯ"

ನಡೆಸಿ ಕೊಡುವವರು : ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ
ಭಾಗವಹಿಸುವವರು : ಕು. ಹರ್ಷಿತಾ, ಅರ್ಪಿತಾ, ಅಕ್ಷತಾ, ಅರ್ಚಿತ, ಕೆ.ಆರ್. ವಿಭಾ, ಯಾಮಿನಿ ಆಸೂರಿ.
ನೇತೃತ್ವ :ಶ್ರೀಮತಿ ಸುಮಾ ಪ್ರಸಾದ್



**11–4–2016 ಸೋಮವಾರ, ಸಂಜೆ – 6 ಗಂಟೆ ಗ್ರಂಥಗಳ ಲೋಕಾರ್ಪಣೆ**

ಲೋಕಾರ್ಪಣೆಗೊಳ್ಳುವ ಗ್ರಂಥಗಳು: 1. **ಶಬ್ದಾನುಶಾಸನಂ–** ಸಮಗ್ರ ಅಧ್ಯಯನ
ಲೇಖಕರು: ಡಾ. ಉಪ್ಪಂಗಳ ರಾಮಭಟ್ಟ

2. **ಸೌಂದರ್ಯಲಹರಿ**, ಅನುವಾದ
ಮೂಲ: ಎಂ.ವಿ.ಸೀ. ಮತ್ತು ಕಪನೀಪತಯ್ಯ
ಸಂಪಾದಕರು: ಪ್ರೊ.ಜಿ. ಅಶ್ವತ್ಥನಾರಾಯಣ

ಗ್ರಂಥ ಲೋಕಾಪಣೆ ಮಾಡುವವರು : **ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ,** ಪ್ರಸಿದ್ಧ ವಿದ್ವಾಂಸರು

**12–4–2016 – ಮಂಗಳವಾರ, ಸಂಜೆ 6 ಗಂಟೆ ಡಿವಿಜಿ – ದತ್ತಿ ಕಾರ್ಯಕ್ರಮ**



**ಉಪನ್ಯಾಸ: ಡಾ. ಮಹಮ್ಮದ್ ಭಾಷಾ, ಗೂಳ್ಯಂ, ಖ್ಯಾತ ಪತ್ರಕರ್ತ**

**ವಿಷಯ : ಪ್ರತಿಕೋದ್ಯಮ**



**13–4–2016 ಮಂಗಳವಾರ ಸಂಜೆ 6–00 ಗಂಟೆ 'ಅಕ್ಕರಗೊಟ್ಟಿ'**

**ತಿಂಗಳ ಮುಕ್ತ ಚಿಂತನೆ**

**ವಿಷಯ : 'ಮನುಷ್ಯ ಜಾತಿ ತಾನೊಂದೆ ವಲಮ್'**
**ಚಾಲನೆ : ಪಿ.ವಿ.ನಾರಾಯಣ**



**16–4–2016 ಶನಿವಾರ, ಸಂಜೆ 6–00 ಗಂಟೆಗೆ ಡಾ. ವಿಜಯಾ ಸುಬ್ಬರಾಜ್ ದತ್ತಿ**

**ಗಣ್ಯಲೇಖಕಿ ಪ್ರಶಸ್ತಿ**

**ಶ್ರೀಮತಿ ಎಚ್.ಎಸ್. ಆರತಿ ಅವರಿಗೆ**

**ಪ್ರಶಸ್ತಿ ಪ್ರದಾನ–ಅಧ್ಯಕ್ಷತೆ : ಡಾ. ನಲ್ಲೂರು ಪ್ರಸಾದ್, ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.**

**18–4–2016, ಸೋಮವಾರ ಸಂಜೆ 6 ಗಂಟೆ 'ಸಂಶೋಧನ ದಿನ'**



**ಪಿ. ಎಚ್.ಡಿ., ಎಂ.ಫಿಲ್‌ಪದವಿ ಪ್ರದಾನ:**

**ಡಾ. ಹಿ. ಚಿ.ಬೋರಲಿಂಗಯ್ಯ ,**
**ಜಾನಪದ ವಿದ್ವಾಂಸ, ಲೇಖಕ, ಪ್ರಾಧ್ಯಾಪಕ**
**ಹಂಪಿಯಕನ್ನಡ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿಗಳು**



**21–4–2016 ಗುರುವಾರ ಸಂಜೆ 6 ಗಂಟೆ**

**ವಚನ ವಿಹಾರ – ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ**

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕಗಳ ಪರಿಚಯ




ಪುಟಗಳು :604

ಬೆಲೆ : ರೂ. 400/-

ಕಾಗದ: 70 ಜಿಎಸ್ ಎಂ ಮ್ಯಾಪ್ ಲಿಥೊ

ಸಂಪಾದಕರು: ಪ್ರೊ. ಜಿ. ಅಶ್ವತ್ಥನಾರಾಯಣ

**ಕೃತಿಯನ್ನು ಕುರಿತು**

ಎಂ.ವಿ.ಸೀತಾರಾಮಯ್ಯ (ಪದ್ಯಾನುವಾದಕರು) ಅವರು ಕನ್ನಡದ ಪ್ರತಿಭಾವಂತ ನವೋದಯ ಕವಿಗಳಲ್ಲಿ ಒಬ್ಬರು, ಸಾಹಿತಿಗಳು, ವಿದ್ವಾಂಸರು ಆದ ಇವರು ಶ್ರೀ ವಿಜಯಕೃತ ಕವಿರಾಜಮಾರ್ಗ, ಉದಯಾದಿತ್ಯಾಲಂಕಾರ ಮೊದಲಾದ ಗ್ರಂಥಗಳನ್ನು ವಿದ್ವತ್ಪೂರ್ಣವಾಗಿ ಸಂಪಾದಿಸಿದ್ದಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವೆಂಬ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸಿ ಲೋಚನ ಎಂಬ ವಿದ್ವತ್ ಪತ್ರಿಕೆ ನಡೆಸಿ, ಅಪೂರ್ವ ಹಸ್ತಪ್ರತಿಭಂಡಾರ ಸ್ಥಾಪಿಸಿ ಸಂಶೋಧನ ಕ್ಷೇತ್ರಕ್ಕೆ ಮೌಲಿಕ ಕೊಡುಗೆಗಳನ್ನು ನೀಡಿದ್ದಾರೆ.ನೂರಾರು ಗ್ರಂಥಗಳನ್ನು ರಚಿಸಿ ವಿಮರ್ಶೆ, ಕಾವ್ಯ, ಕಥೆ ಕಾದಂಬರಿ, ಗ್ರಂಥಸಂಪಾದನೆ ಇತ್ಯಾದಿ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಇವರ ಅಪ್ರಕಟಿತ ಸೌಂದರ್ಯಲಹರಿಯ ಕನ್ನಡ ಪದ್ಯಾನುವಾದ ಇದೀಗ ಪ್ರಕಟವಾಗುತ್ತಿದೆ.

ಬಿ.ಎಸ್. ಕಪನೀಪತಯ್ಯ (ಟೀಕಾಕರರು) ಅವರು ನಾಲ್ವಡಿಕೃಷ್ಣರಾಜ ಒಡೆಯರ ಕಾಲದಲ್ಲಿ ಅರಮನೆಯ ಕಚೇರಿ ವ್ಯವಸ್ಥಾಕರಾಗಿ ಸೇವೆ ಸಲ್ಲಿಸಿದ ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರು.ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರ ಪ್ರೀತಿವಿಶ್ವಾಸಗಳಿಗೆ ಪಾತ್ರರಾದರು.ಅನೇಕ ಸಂಘ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿ ಶ್ರೀ ರಾಮತತ್ತ್ವ ಪರಾಯಣ, ಗುರುಭಕ್ತಪ್ರಿಯ ಮೊದಲಾದ ಪ್ರಶಸ್ತಿಗಳನ್ನು ಪಡೆದು ಆದಿಶಂಕರ ಸ್ತೋತ್ರ ಸಾಹಿತ್ಯಕ್ಕೆ ಕನ್ನಡದಲ್ಲಿ ಟೀಕೆ ಬರೆದ ಅವರು ಸೌಂದರ್ಯಲಹರೀ ಸ್ತೋತ್ರ ರತ್ನಕ್ಕೆ ಅಮೋಘಟೀಕೆ ಬರೆದಿದ್ದಾರೆ.ಇದುವರೆಗೆ ಅಪ್ರಕಟಿತವಾದ ಈ ಸ್ತೋತ್ರಟೀಕೆ ಈಗ ಪ್ರಕಟವಾಗುತ್ತಿದೆ.

ಪ್ರೊ॥ ಜಿ. ಅಶ್ವತ್ಥನಾರಾಯಣ (ಗ್ರಂಥ ಸಂಪಾದಕರು) ಇವರು ಈಗಾಗಲೇ ವಿಜಯದಾಸರ ಕೀರ್ತನೆಗಳು ಮತ್ತು ಉಗಾಭೋಗಗಳು ಮತ್ತು ಪ್ರಸನ್ನ ಶ್ರೀನಿವಾಸ ದಾಸರ ಸಮಗ್ರಕೃತಿಗಳು, ಮಹಲಿಂಗರಂಗನ ಅನುಭವಾಮೃತ(ಟೀಕೆ), ಎಂ.ವಿ.ಸೀ. ಅವರ ಅನುವಾದಿತ ಸಮಗ್ರ ಜೀವನ ಚರಿತ್ರೆಗಳು ಮತ್ತು ಕಾದಂಬರಿಗಳು ಇತ್ಯಾದಿ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಇದೀಗ ಸೌಂದರ್ಯಲಹರೀ ಸ್ತೋತ್ರದ ಬಗ್ಗೆ ಕಪನೀಪತಯ್ಯನವರು ಬರೆದ ಟೀಕೆ ಮತ್ತು ಎಂ.ವಿ.ಸೀ ಅವರು ರಚಿಸಿದ ಪದ್ಯಾನುವಾದ ಅಪ್ರಕಟಿತ ಹಸ್ತಪ್ರತಿಗಳನ್ನು ಪರಿಷ್ಕರಿಸಿ ಸಂಪಾದಿಸಿದ್ದಾರೆ. ಕಪನೀಪತಯ್ಯನವರ ಸೌಂದರ್ಯಲಹರೀ ಟೀಕೆಯನ್ನು ಮೂಲ–ಪಾಠಾಂತರ–ಪದವಿಭಾಗ– ಪೂರ್ಣವಾಗಿ ಸಂಪಾದಿಸಿದ್ದಾರೆ. ಸೌಂದರ್ಯಲಹರೀ ಸ್ತೋತ್ರ ಕನ್ನಡದಲ್ಲಿ ಇಷ್ಟೊಂದು ವಿವರಣೆಗಳೊಡನೆ ಪ್ರಕಟವಾಗುತ್ತಿರುವುದು ಇದೇ ಮೊದಲು.




ಪುಟಗಳು : 616

ಬೆಲೆ : ರೂ. 400/-

ಕಾಗದ: 70 ಜಿಎಸ್ ಎಂ ಮ್ಯಾಪ್ ಲಿಥೊ

ಲೇಖಕರು: ಡಾ. ಉಪ್ಪಂಗಳ ರಾಮಭಟ್ಟ

ಹಳೆಗನ್ನಡ ವ್ಯಾಕರಣದ ಬಗ್ಗೆ ಕ್ರಿ.ಶ 1604ರಲ್ಲಿ ಸಂಸ್ಕೃತದಲ್ಲಿ ಪೂರ್ಣಪ್ರಮಾಣದ ಕೃತಿಯೊಂದನ್ನು ಭಟ್ಟಾಕಳಂಕನು 'ಕರ್ಣಾಟಕ ಶಬ್ದಾನುಶಾಸನಂ' ಎಂದು ರಚಿಸಿದ್ದಾನೆ. ಆ ಕಾಲದಲ್ಲಿ ಸಂಸ್ಕೃತದಲ್ಲಿ ಹಳೆಗನ್ನಡ ವ್ಯಾಕರಣವನ್ನು ರಚಿಸಿದ ಕೃತಿಕರ್ತೃವಿನ ಉದ್ದೇಶ ತಿಳಿಯದು. ಆದರೆ ರಾ.ನರಸಿಂಹಾಚಾರ್ಯರಂಥ ವಿದ್ವಾಂಸರು ಈ ಗ್ರಂಥವನ್ನು ಕುರಿತು "ಕನ್ನಡ ಭಾಷೆಗೆ ಇದು ಅತ್ಯುತ್ತಮ ವ್ಯಾಕರಣ ಗ್ರಂಥವೆಂದು ಹೇಳಬಹುದು" ಎಂದು ಇದರ ಮಹತ್ವವನ್ನು ಕುರಿತು ಹೇಳಿದ್ದಾರೆ.ಇದು ಹಳೆಗನ್ನಡ ವ್ಯಾಕರಣ ಮಾಲಿಕೆಯಲ್ಲಿ ನಾಲ್ಕನೆಯದು ಹಾಗೂ ಕೊನೆಯದು. ಇದರ ಮಹತ್ವವನ್ನರಿತ ಘನ ವಿದ್ವಾಂಸರಾದ ಡಾ. ಉಪ್ಪಂಗಳ ರಾಮಭಟ್ಟ ಅವರು ಇದರ ಸಮಗ್ರ ಅಧ್ಯಯನವನ್ನು ಈ ಕೃತಿಯಲ್ಲಿ ಕೈಗೊಂಡಿದ್ದಾರೆ. ಸಂಸ್ಕೃತ ಮತ್ತು ಕನ್ನಡ ವ್ಯಾಕರಣಗಳ ಹಿನ್ನೆಲೆಯಲ್ಲಿ ತೌಲನಿಕವಾಗಿ ಹಾಗೂ ಆಧುನಿಕ ಭಾಷಾ ವಿಜ್ಞಾನದ ಹೊಳಹುಗಳಲ್ಲಿ ಈ ಕೃತಿಯನ್ನು ರಚಿಸಿರುವ ವಿದ್ವಾನ್ ರಾಮಭಟ್ಟರು ಅಭಿನಂದನಾರ್ಹರು. ಈ ಕೃತಿ ವಿದ್ವತ್ ಕೃತಿಗಳ ನಡುವೆ ವಿರಾಜಿಸುವುದರಲ್ಲಿ ಸಂಶಯವಿಲ್ಲ. ಓದುಗರು 'ಕರ್ನಾಟಕ ಶಬ್ದಾನುಶಾಸನಂ' ಎಂಬ ಕೃತಿಯನ್ನು ಬರಮಾಡಿಕೊಳ್ಳುವರೆಂಬ ನಂಬಿಕೆ ನಮ್ಮದು.

ತನ್ನ ಮೂಲ ಜೀರ್ಣವಾಗಿರುವ ಮೂರುವರೆ ದಶಕಗಳಲ್ಲಿ ಹಳೆಯದಾದ ಹಸ್ತಪ್ರತಿಯನ್ನೇ ಆಧರಿಸಿ ವಿಸ್ತಾರವನ್ನು ಸಂಕ್ಷೇಪಿಸಿದೆ ಎನ್ನುತ್ತಾರೆ ಲೇಖಕರು. ಕೊನೆಯಲ್ಲಿ ನೀಡಿರುವ ಆಧಾರ ಗ್ರಂಥಗಳು, ಪತ್ರಿಕೆಗಳ ಲೇಖನಗಳ ಪಟ್ಟಿ ಅಧ್ಯಯನದ ಆಳ ಅಗಲಗಳನ್ನು ಸೂಚಿಸುತ್ತವೆ. ಸಂಸ್ಕೃತ ಭಾಷೆಯಲ್ಲಿರುವುದರಿಂದ ಕನ್ನಡ ವಿದ್ವಾಂಸರಿಂದ, ಸ್ವಲ್ಪ ದೂರವಾಗಿದ್ದ ಈ ಗ್ರಂಥವನ್ನು ಎಲ್ಲರಿಗೂ ಸುಲಭವಾಗುವಂತೆ ಮಾಡಿದ ಲೇಖಕರ ಪರಿಶ್ರಮ ಅಭಿನಂದನೀಯ, ಅವರಿಗೆ ಶುಭಾಶಯಗಳು **ಪ್ರೊ.ಜಿ. ವೆಂಕಟಸುಬ್ಬಯ್ಯ**

**ಕೋರಿಕೆ**

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/- ಮಾತ್ರ.ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಫೆಬ್ರವರಿ2016–ಮಾರ್ಚ್2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಗಮಕ ವಾಹಿನಿ ಕಾರ್ಯಕ್ರಮ ಮಾಲೆ

ಈ ಮಾಲೆಯ ಅಡಿಯಲ್ಲಿ ದಿನಾಂಕ 02–03–2016ರಂದು ಶ್ರೀ ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ವತಿಯಿಂದ ಜೈಮಿನಿ ಭಾರತದ "ಮಯೂರ ಧ್ವಜ ವೃತ್ತಾಂತ"ದ ಗಮಕ ರೂಪಕವನ್ನು ಶಾಲಾ ವಿದ್ಯಾರ್ಥಿನಿಯರಾದ ಶಾರ್ವರಿ ಸಿ.ವಿ. ವರ್ಣಿಕ, ರಂಜನಿ, ಅನನ್ಯ, ಪ್ರಾರ್ಥನಾ ಮಧುಸೂದನ, ಪ್ರೇರಣಾ ಮಧುಸೂದನ ಅವರುಗಳು ಶ್ರೀಮತಿ ಸಿ.ವಿ. ಶ್ರೀಮತಿ ಅವರ ನೇತೃತ್ವದಲ್ಲಿ ನಡೆಸಿ ಕೊಟ್ಟರು.





ಶ್ರೀಮತಿ ರಂಗನಾಯಕಮ್ಮ–ಕೆ.ಜಿ. ಸುಬ್ಬರಾವ್ ದತ್ತಿಕಾರ್ಯಕ್ರಮದ ಅಡಿಯಲ್ಲಿಶ್ರೀಮತಿ ವತ್ಸಲಾ ರಾವ್ ತಂಡದವರು ಸುಶ್ರಾವ್ಯವಾಗಿ ದೇವರನಾಮಗಳನ್ನು ಹಾಡಿದರು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ** – ಸಾಕ್ಷ್ಯ ಚಿತ್ರಗಳ ಪ್ರದರ್ಶನದಲ್ಲಿ 8–3–2016ರಂದು ಹೊಸಗನ್ನಡ ಹಾಗೂ ಗುಲ್ಬರ್ಗಾ ಕನ್ನಡ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಈ ಸಾಕ್ಷ್ಯ ಚಿತ್ರಗಳು ಬಹಳ ಉಪಯುಕ್ತವಾಗಿದ್ದವು.

## ಅಕ್ಕರಗೊಟ್ಟಿ

15–03–2016 ರಂದು ತಿಂಗಳಅಕ್ಕರಗೊಟ್ಟಿಕಾರ್ಯಕ್ರಮದ ಅಡಿಯಲ್ಲಿ "ಜೋಗುಳ(ಲಾಲಿಗಳು)"– ಒಂದು ವೈಜ್ಞಾನಿಕ ವಿಶ್ಲೇಷಣೆ ಎಂಬ ವಿಷಯದ ಬಗ್ಗೆ ಡಾ.ಹರಿಹರ ಶ್ರೀನಿವಾಸರಾವ್, ಜಲತಂತ್ರಜ್ಞಾನ ತಜ್ಞರು(ನಿವೃತ್ತ) ಬೆಂಗಳೂರು ಇವರು ಪ್ರಾತ್ಯಕ್ಷಿಕೆ ಸಹಿತವಾಗಿ ಮುಕ್ತ ಚರ್ಚೆಗೆ ಚಾಲನೆ ಕೊಟ್ಟರು.

ಮಗುವಿನ ಮೊದಲನೇ ಉಸಿರಿನಿಂದ ಪ್ರಾರಂಭವಾಗಿ ಅಳು ನಗು ಇತ್ಯಾದಿ ಬೌದ್ಧಿಕ ಕ್ರಿಯೆಗಳಿಗೆ ನಾಂದಿ ಹಾಡುತ್ತಾ, ದೊಡ್ಡವರ ಕಾಯಿಲೆಗಳನ್ನೂ ಶಮನಗೊಳಿಸುವ ಶಕ್ತಿಯುಳ್ಳ ತಾಯಿಯ ಸಾಂತ್ವನವನ್ನೀಯುವ ಲಾಲಿ ಹಾಡುಗಳಿಂದಾಗುವ ಪ್ರಯೋಜನಗಳನ್ನು ವಿವರಿಸಿದರು.ಲಾಲಿ ಹಾಡುಗಳ ಇತಿಹಾಸವನ್ನು ಶಾಸನಗಳ ಕಾಲದಿಂದ ಉಲ್ಲೇಖಿಸಿ ಹಲವಾರು ಜೋಗುಳಗಳನ್ನು ರಾಗಬದ್ಧವಾಗಿ ಹಾಡಿ ತೋರಿಸಿ ಅವುಗಳ ಮಹತ್ವವನ್ನು ತಿಳಿಸಿಕೊಟ್ಟರು.ಪ್ರೊ.ಅಶ್ವತ್ಥನಾರಾಯಣ ಅವರು ಜೋಗುಳಗಳ ಬಗ್ಗೆಯ ವಿವಿಧ ಉಲ್ಲೇಖಗಳನ್ನು ಸಭೆಯ ಗಮನಕ್ಕೆ ತಂದರು. ಹೆಚ್ಚಿನ ಸಂಖ್ಯೆಯಲ್ಲಿ ಹಾಜರಿದ್ದ ಸಭೆಯಲ್ಲಿ ಶ್ರೀ ಹೆ.ಜಿ.ಸೋಮಶೇಖರರಾವ್, ಡಾ. ಪಿ.ವ್. ನಾರಾಯಣ,ಶ್ರೀ ಜಯರಾಮ ರೈ, ಶ್ರೀಮತಿ ನಳಿನಾ, ಡಾ। ನಳಿನೀ ವೆಂಕಟೇಶ್, ಶ್ರೀ ಗುರುಪ್ರಸಾದ್, ಪ್ರೊ.ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ರವೀಂದ್ರನಾಥ್ ಮುಂತಾದವರು ಭಾಗವಹಿಸಿದ್ದರು.

## ಪ್ರಬಂಧ ಸ್ಪರ್ಧೆ ವಿಜೇತರಿಗೆ ಬಹುಮಾನ ವಿತರಣೆ

ಶ್ರೀಮತಿ ರಂಗನಾಯಕಮ್ಮ–ಕೆ.ಜಿ.ಸುಬ್ಬರಾವ್ ದತ್ತಿ ಕಾರ್ಯಕ್ರಮದ ಅಡಿಯಲ್ಲಿ ಪದವಿ ಪೂರ್ವ ವಿದ್ಯಾರ್ಥಿಗಳಿಗಾಗಿ "ಸಮಾಜ ಮತ್ತು ತಂತ್ರಜ್ಞಾನ" ಎಂಬ



ವಿಷಯದ ಬಗ್ಗೆ ಪ್ರಬಂಧ ರಚನೆ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಈ ಸ್ಪರ್ಧೆಯಲ್ಲಿ ವಿಜೇತರಾದವರು:

1. ಮೊದಲನೇ ಬಹುಮಾನ: ಶ್ರೀ ಚಂದ್ರಮೌಳೀಶ್ವರ
2. ಎರಡನೇ ಬಹುಮಾನ: ಕುಮಾರಿ ರಮ್ಯಾ ಎಸ್
3. ಮೂರನೇ ಬಹುಮಾನ: ಕುಮಾರಿ ಮಾಯಾವತಿ ಎಂ

6ನೇ ಪುಟಕ್ಕೆ

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

ಎಕ್ಕುಟ್ಟೋಗು: "ನಿನ್ನ ಮನೆ ಎಕ್ಕುಟ್ಟೋಯ್ತದೆ" ಎಂದೋ "ನಿನ್ನ ಮನೆ ಎಕ್ಕುಟ್ಟೋಗ" ಎಂದೋ ಹಿಡಿಶಾಪ ಹಾಕುವುದನ್ನು ನಾವೆಲ್ಲ ಕೇಳಿದ್ದೇವೆ. ಈ ಶಬ್ದದಲ್ಲಿ ಮೂರು ಪದಗಳು ಅಡಗಿವೆ: ಎಕ್ಕೆ+ಹುಟ್ಟಿ+ಹೋಗು. ಎಕ್ಕೆ ಎಂಬುದು ಒಂದು ಗಿಡ, ಎಕ್ಕದ ಗಿಡ.ಇದು ಹಳಗನ್ನಡದಲ್ಲಿ 'ಎರ್ಕೆ' ಎಂಬ ರೂಪದಲ್ಲಿಯೂ ದೊರೆಯುತ್ತದೆ.ತಮಿಳಿನಲ್ಲಿ 'ಎರುಕ್ಕು' ಎಂದೂ, ತುಳುವಿನಲ್ಲಿ 'ಎಕ್ಕಮಲೆ' 'ಎಕ್ಕಮಾಲೆ' 'ಎಕ್ಕಮೆ' ಎಂಬ ರೂಪಗಳಲ್ಲಿಯೂ, ಮಲಯಾಳಂನಲ್ಲಿ 'ಎರಿಕ್ಕು' ಎಂಬ ರೂಪದಲ್ಲಿಯೂ ಈ ಶಬ್ದ ದೊರೆಯುತ್ತದೆ. ಉತ್ತರಣಿ ಬನ್ನಿಮರ ಮುತ್ತುಗ ಮುಂತಾದವುಗಳಂತೆ ಎಕ್ಕೆಯ ಗಿಡವನ್ನೂ ಪೂಜಿಸುತ್ತಿದ್ದ ಪದ್ಧತಿಯಿತ್ತು.ಇದನ್ನು ಕ್ರಿಶ 1150 ರ ಹೊತ್ತಿನ ಬ್ರಹ್ಮಶಿವ ಎಂಬ ಕವಿ ತನ್ನ 'ಸಮಯಪರೀಕ್ಷೆ'ಯಲ್ಲಿ ಗೇಲಿ ಮಾಡುತ್ತಾನೆ.

ಸಂಸ್ಕೃತದಲ್ಲಿ ಈ ಗಿಡವನ್ನು 'ಅರ್ಕ' ಎಂದು ಕರೆಯುತ್ತಾರೆ. ಅರ್ಕ ಎಂದರೆ 'ಸೂರ್ಯ' ಎಂದೂ 'ಪೂಜಿಸಲು ಅರ್ಹವಾದ' ಎಂದೂ, ಇತರ ಅನೇಕ ಅರ್ಥಗಳೂ ಸಂಸ್ಕೃತದಲ್ಲಿದೆ.ಮೂರನೆಯ ಮದುವೆ ಮಾಡಿಕೊಳ್ಳುವಾಗ (ಗಂಡಸು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಲ್ಲ!)ಮುಂಚೆ ಎಕ್ಕದ ಗಿಡವನ್ನು ಹೆಣ್ಣೆಂದು ಭಾವಿಸಿ ಅದರೊಡನೆ ಮದುವೆ ಮಾಡಿಕೊಳ್ಳುವ ಪರಿಪಾಟವಿತ್ತು; ಇದನ್ನು 'ಅರ್ಕವಿವಾಹ' ಎಂದೇ ಕರೆಯುತ್ತಿದ್ದರು.ಈ ಗಿಡದ ಎಲೆಗಳ ಅಂಗೈಯಗಲವಾಗಿರುತ್ತದೆ; ರಥಸಪ್ತಮಿಯಂದು (ಮಾಘ ಶುದ್ಧಸಪ್ತಮಿ) ಕೆಲವರು ಎಕ್ಕದೆಲೆಗಳನ್ನು ಭುಜದ ಮೇಲಿರಿಸಿಕೊಂಡು ಸ್ನಾನ ಮಾಡುವ ಪದ್ಧತಿಯಿದೆ.ಇದನ್ನು ಅರ್ಕವ್ರತ (ಸೂರ್ಯನ ವ್ರತ) ಎಂದೇ ಕರೆಯುತ್ತಾರೆ.ಅಂದರೆ ಎಕ್ಕದ ಗಿಡಕ್ಕೂ ಸೂರ್ಯನಿಗೂ ಸಂಬಂಧವನ್ನು ಕಲ್ಪಿಸಿಕೊಳ್ಳಲಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಇಂಥ ಎಕ್ಕದ ಗಿಡವನ್ನು ಯಾರೂ ಬೆಳೆಸುವುದಿಲ್ಲ. ಇದೊಂದು ಕಾಡುಗಿಡವಾಗಿ ಎಲ್ಲೆಂದರಲ್ಲಿ ಬೆಳೆಯುತ್ತದೆ, ವಿಶೇಷವಾಗಿ ಪಾಳುಗಳಲ್ಲಿ. ಹೀಗಾಗಿ ಮನೆ ಎಕ್ಕೆ ಹುಟ್ಟಿ ಹೋಗು ಎಂಬ ಬೈಗುಳದ ಹಿಂದೆ ಹೀಗೆ ಬೆಳೆಯುವುದು ಸೂಚಿತವಾಗಿದೆ.ಪಾಳಿನಲ್ಲಿ ಈ ಗಿಡ ಬೆಳೆಯುವುದರಿಂದ ಮನೆ ಸಂಪೂರ್ಣ ಹಾಳಾಗಿ ಆ ಜಾಗದಲ್ಲಿ ಎಕ್ಕೆ ಬೆಳೆಯುವ ಹಾಗಾಗಲಿ ಎಂಬ ಶಾಪ 'ಎಕ್ಕುಟ್ಟೋಗು' ಎಂಬ ಮಾತಿನಲ್ಲಿದೆ.ಇದೊಂದು ಭಯಾನಕ ಪ್ರತಿಮೆ.ಮನೆಯಿದ್ದ ಕುರುಹೇ ನಾಶವಾಗಿಬಿಡಲಿ ಎಂಬ ತೀವ್ರ ಆಕ್ರೋಶ ಇದರಿಂದ ವ್ಯಕ್ತವಾಗುತ್ತದೆ.

* * *

ಎಣ್ಣೆ: ಬಹಳ ಪರಿಚಿತವಾದ ಈ ಪದಕ್ಕೆಕಾಳುಗಳಿಂದ ತೆಗೆದ ದ್ರವವಸ್ತು ಎಂಬುದು ಅರ್ಥ. ಇದು ದ್ರಾವಿಡ ಪದ; ಹಾಗಾಗಿ ಕೆಲವು ಇತರ ದ್ರಾವಿಡ ಭಾಷೆಗಳಲ್ಲಿಯೂ ಇದರ ಜ್ಞಾತಿ ಪದಗಳಿವೆ: ತಮಿಳಿನಲ್ಲಿ ಎಣ್ಣೈ ಎಂದೂ, ಮಲಯಾಳಂನಲ್ಲಿ ಎಣ್ಣ ಎಂದೂ ತುಳುವಿನಲ್ಲಿ ಎಣ್ಣೆ ಎಂದೂ ಆಗುತ್ತದೆ. ಈ ಶಬ್ದದಲ್ಲಿ ಎರಡು ಭಾಗಗಳಿವೆ: ಎಳ್+ನೆಯ್, ಎಂದರೆ ಎಳ್ಳಿನ ಜಿಡ್ಡು ಎಂದು. ಎಳ್ಳು ಎಲ್ಲರಿಗೂ ಗೊತ್ತಿರುವ ಎಣ್ಣೆ ತೆಗೆಯುವ ಕಾಳು.ಸಂಸ್ಕೃತದಲ್ಲಿ ಎಣ್ಣೆ ಎಂಬುದಕ್ಕೆ ತೈಲ ಎಂಬುದು ಸಂವಾದಿಯಾದುದು; ಅಲ್ಲಿಯೂ ತಿಲಕ್ಕೆ (ಎಳ್ಳು) ಸಂಬಂಧಿಸಿದ ಎಂಬರ್ಥವೇ ಇದೆ.ಇದು ಮುಂದೆ ಎಲ್ಲ ಕಾಳುಗಳ ಜಿಡ್ಡಿಗೂ ಅನ್ವಯಿಸಿತು; ಕಡಲೆಕಾಯಿ ಎಣ್ಣೆ (ಒಳ್ಳೆಣ್ಣೆ), ಹರಳೆಣ್ಣೆ (ಔಡಲೆಣ್ಣೆ), ಸಾಸಿವೆಯೆಣ್ಣೆ ಮುಂತಾದುವು.ಎಂದರೆ ಅದರ ಅರ್ಥ ವಿಸ್ತಾರಗೊಂಡಿದೆ (ಭಾಷಾವಿಜ್ಞಾನದಲ್ಲಿ ಈ ಪ್ರಕ್ರಿಯೆಯನ್ನು ಎಕ್ಸ್‌ಪಾನ್ಶನ್ ಎಂದೇ ಕರೆಯುತ್ತಾರೆ).ತುಂಬ ಹಳೆಯ ಕನ್ನಡ ಕಾವ್ಯ ಹಾಗೂ ಶಾಸನಗಳಲ್ಲಿ ಎಣ್ಣೆ ಎಂಬ ಪ್ರಯೋಗವನ್ನು ಕಾಣಬಹುದು. "ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟೆದವೋಲ್" ಎಂಬ ಸುಂದರವಾದ ಮಾತು ಒಂದು ಕಾವ್ಯದಲ್ಲಿದೆ."ಎಣ್ಣೆ ತೀರುತ್ತಲಿರೆ ಒಡಕು ಹಣತೆಯ ಮುಂದೆ ಬತ್ತಿ ಹೊಸೆತ" ಎಂಬ ಪ್ರತಿಮೆ ಗೋಪಾಲಕೃಷ್ಣ ಅಡಿಗರ ಕವನದ್ದು.

ಮೈಗೆಲ್ಲ ಹಚ್ಚಿಕೊಂಡು (ಸಾಮಾನ್ಯವಾಗಿ ಹರಳೆಣ್ಣೆಯನ್ನು) ಮಾಡುವ ಸ್ನಾನವನ್ನು 'ಎಣ್ಣೆ ಸ್ನಾನ' ಎಂದೇ ಕರೆಯುತ್ತಾರೆ. ಹಬ್ಬದ ದಿನ ಎಣ್ಣೆಸ್ನಾನ ಒಂದು ವಿಶೇಷ ಎಂಬುದು ಕನ್ನಡಿಗರಿಗೆಲ್ಲ ಗೊತ್ತು. ಯಾವುದಾದರೂ ಅವಕಾಶ ಉಂಟಾದಾಗ ನಿರ್ಲಕ್ಷ್ಯ ತೋರುವುದನ್ನು 'ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊ' ಎಂಬ ನುಡಿಗಟ್ಟಿನಿಂದ ಸೂಚಿಸುತ್ತಾರೆ.ಎಣ್ಣೆಯು ಉರಿಯುವುದನ್ನು ಹೆಚ್ಚಿಸುತ್ತದೆ (ಎಂದರೆ ಇಂಧನ).ಅದಕ್ಕೇ ಪೆಟ್ರೋಲ್, ಡೀಸಲ್‌ನಂತಹ ಕಾಳಿನಿಂದ ತೆಗೆಯದ ಇಂಧನಗಳನ್ನೂ ಎಣ್ಣೆ ಎಂದೇ ಕರೆಯುವ ರೂಢಿಯಿದೆ.'ಎಣ್ಣೆ ಸುರಿದ ಹಾಗೆ' ಎಂಬ ಮಾತು ಉದ್ರೇಕಗೊಳಿಸು ಎಂಬರ್ಥದಲ್ಲಿ ಬಳಕೆಯಾಗುವ ನುಡಿಗಟ್ಟು.ಎಣ್ಣೆಯು ಜಿಡ್ಡುಪದಾರ್ಥವಾದುದರಿಂದ ಜಾರುತ್ತದೆ; ಅದಕ್ಕೇ ನುಣುಚಿಕೊಳ್ಳುವುದನ್ನು 'ಮೈಗೆ ಎಣ್ಣೆ ಸವರಿಕೊಂಡು' ಮಾಡುವ ಕುಸ್ತಿಗೆ ಹೋಲಿಸುವ ವಾಡಿಕೆಯಿದೆ. ಬಂಡಿಗಳ ಚಕ್ಕರವು ಸರಾಗವಾಗಿ ಉರುಳುವಂತೆ ಮಾಡುವ ಜಿಡ್ಡಿಗೆ 'ಕೀಲೆಣ್ಣೆ' ಅಥವಾ ಕಂಜಣಿ ಎಣ್ಣೆ ಎನ್ನುತ್ತಾರೆ. ಅಲ್ಲದೆ, ಕೀಲುನೋವಿಗೆ ಉಡದ ಕೊಬ್ಬಿನಿಂದ ಮಾಡಿದ ಉಡದೆಣ್ಣೆಯನ್ನು ಬಳಸುವ ರೂಢಿಯೂ ಇದೆ.

ಕೆಲವರು ಹೆಂಡವನ್ನು ಎಣ್ಣೆ ಎನ್ನುತ್ತಾರೆ; 'ಎಣ್ಣೆ ಹೊಡಿ' ಎಂಬುದು ಹೆಂಡ ಕುಡಿಯುವುದನ್ನು ಸೂಚಿಸುತ್ತದೆ. ಒಂದೇ ಅರ್ಥದ 'ಹೆಂಡ ಕುಡಿ', 'ಗುಂಡು ಹಾಕು', 'ಎಣ್ಣೆ ಹೊಡಿ' – ಈ ನುಡಿಗಟ್ಟುಗಳು ಬೇರೆ ಬೇರೆ ಸಾಮಾಜಿಕ ಸ್ತರಗಳ ಜನಗಳು ಬಳಸುವ ಭಾಷೆಯಲ್ಲಿ ಕಾಣಿಸುತ್ತವೆ.

---

5ನೇ ಪುಟದಿಂದ...

### ವಚನ ವಿಹಾರ : ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ




**21–03–2016** ವಚನ ವಿಹಾರ ಸಾಕ್ಷ್ಯ ಚಿತ್ರಗಳಲ್ಲಿ ಅಕ್ಕ ಮಹಾದೇವಿಯ ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು.ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

**24–2–2016** ರಂದು ಎಂ.ಎ.ಜಯಚಂದ್ರ, ಆ.ನೆ. ಉಪಾಧ್ಯೆ, ಡಿ.ಎಲ್. ನರಸಿಂಹಚಾರ್ಯ ಮತ್ತು ಎಂ.ಜಿ ನಂಜುಂಡಾರಾಧ್ಯ ದತ್ತಿ ಕಾರ್ಯಕ್ರಮದಡಿಯಲ್ಲಿ ಡಾ ಎಸ್. ಪಿ. ಪದ್ಮ ಪ್ರಸಾದ್ ಅವರು **"ಯಶೋಧರ ಕಥಾನಕಗಳು"** ಎಂಬ ವಿಥಯದ ಬಗ್ಗೆ ಉಪನ್ಯಾಸ ನೀಡಿದರು.

# ಷೇಕ್ಸ್ ಪಿಯರ್‌ಗೆ ನಮಸ್ಕಾರ



ಸಂಪಾದನ ಮತ್ತು ಮುದ್ರಣ ವಿನ್ಯಾಸ

ಶಾ. ಬಾಲೂರಾವ್

ಪುಟಗಳು : 62+394

ಬೆಲೆ: ರೂ. 200/-

ಪ್ರಕಾಶನ: ಕುವೆಂಪು ಭಾಷಾಭಾರತಿ ಪ್ರಾಧಿಕಾರ, ಬೆಂಗಳೂರು

ಮಹಾಕವಿ ವಿಲಿಯಂ ಷೇಕ್ಸ್ ಪಿಯರ್ ಸಹಸ್ರಾರು ಮೈಲಿಗಳಾಚೆಯ ಇಂಗ್ಲೆಂಡಿನಲ್ಲಿ ಹುಟ್ಟಿಇಂಗ್ಲಿಶ್ ನಲ್ಲಿ ಬರೆದವನಾದರೂ ಅವನು ಕನ್ನಡಜನತೆಗೆ "ಇವನು ನಮ್ಮ ಕವಿಗಳಲ್ಲೊಬ್ಬನೇ" ಎನ್ನುವಷ್ಟು ಅಚ್ಚುಮೆಚ್ಚು. 1964 ರಲ್ಲಿಜಗತ್ತು ಈ ಮಹಾಕವಿಯ ನಾನೂರನೇ ವರ್ಧಂತಿ ಅಯ್ನ್ನು ವಿಜೃಂಭಣೆಯಿಂದ ಆಚರಿಸಿತು. ಈ ಶುಭ ಸಂದರ್ಭದ ನೆನಪಿಗಾಗಿ ಕವಿಯ ಬಗ್ಗೆ ಕನ್ನಡಿಗರಿಗಿರುವ ಆದರ. ಅಭಿಮಾನ ಕೃತಜ್ಞತೆಗಳ ಪ್ರತೀಕವಾಗಿ ನಿರ್ಮಿತಗೊಂಡ ಸ್ಮಾರಕಈಗ್ರಂಥ.ಈ ಗ್ರಂಥ ಸುಮಾರು ನಲವತ್ತು ಜನ ಅಗ್ರಪಂಕ್ತಿಯ ಹಿರಿ ಕಿರಿಯ ಕನ್ನಡ ಕವಿ ಸಾಹಿತಿಗಳಿಂದ ವರ್ಣಪರಿಮಳ ಭರಿತವಾದ ಒಂದೊಂದು ಹೂ ತಂದುಕಟ್ಟಿಕವಿಚಕ್ರವರ್ತಿಯ ನೆನಪಿಗೆ ಅರ್ಪಿಸಿದ ಹೂಗೊಂಚಲು. ಶ್ರೀ ಶಾ. ಬಾಲೂರಾವ್ ಅವರ ಎಣೆಯಿಲ್ಲದ ಪರಿಶ್ರಮದಿಂದ ಈ ಕೃತಿ ಸಿದ್ಧಗೊಂಡು 1966 ರಲ್ಲಿಅಚ್ಚಾಗಿದೆ.

ಈ ಹೊತ್ತಿನಲ್ಲಿ 1966ರ ಷೇಕ್ಸ್ ಪಿಯರ್ ಗೆ ನಮಸ್ಕಾರ ಕೃತಿಯು ಓದುಗರಿಗೆ ದೊರೆಯುತ್ತಿಲ್ಲವೆಂದು ಮನಗಂಡ ಕುವೆಂಪು ಭಾಷಾಭಾರತಿ ಪ್ರಾಧಿಕಾರವು ಈ ಕೃತಿಯನ್ನು ಮರುಮುದ್ರಿಸಿದೆ. ಈ ಕೃತಿಯ ಪುಟಗಳನ್ನು ಮರಳಿ ಬೆರಳಚ್ಚು ಮಾಡುವ ಬದಲಿಗೆ ಮೂಲ ಪ್ರತಿಯ ಪುಟಗಳನ್ನು ಸ್ಕ್ಯಾನ್ ಮಾಡಿ ಮುದ್ರಿಸಲಾಗಿದೆ. ಮೂಲಕೃತಿಯ ಅಂದವನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಈ ಹಾದಿಯನ್ನು ಹಿಡಿಯಲಾಗಿದೆ.

## ಅಭಿನಂದನೆಗಳು

### ಡಾ॥ ಮನುಬಳಿಗಾರ್



ಖ್ಯಾತ ಸಾಹಿತಿಗಳೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಜಿ ನಿರ್ದೇಶಕರೂ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಆಡಳಿತಾಧಿಕಾರಿಗಳೂ ನಿವೃತ್ತ ಕೆಎಎಸ್ ಅಧಿಕಾರಿಗಳೂ ಆದ ಡಾ.ಮನುಬಳಿಗಾರ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನ 25ನೇ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಿದ್ದಾರೆ. ಶ್ರೀಯುತರಿಗೆ 'ಹೊಂಗನಸು'ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಶ್ರೀಯುತರು ಆರು ಕವನ ಸಂಕಲನ, ಐದು ಕಥಾಸಂಕಲನ, ನಾಲ್ಕು ಲಲಿತ ಪ್ರಬಂಧ ಸಂಕಲನ, ನಾಲ್ಕು ಜೀವನ ಚರಿತ್ರೆಗಳು, ಒಂದು ನಾಟಕ, ಏಳು ಸಂಪಾದಿತ ಗ್ರಂಥಗಳು ಸೇರಿಒಟ್ಟು ಇಪ್ಪತ್ತೇಳಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿ ಖ್ಯಾತನಾಮರಾಗಿದ್ದಾರೆ.

### ಶ್ರೀ ಮಾಯಣ್ಣ




ಅನಿಕೇತನ ಕನ್ನಡ ಬಳಗದ ಅಧ್ಯಕ್ಷರೂ ಸಾಹಿತ್ಯ ಪ್ರಿಯರೂ ಆದ ಶ್ರೀ ಮಾಯಣ್ಣನವರು ಇತ್ತೀಚೆಗೆ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಯಲ್ಲಿ ಬೆಂಗಳೂರು ನಗರ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.' ಹೊಂಗನಸು' ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಶಾಶ್ವತ ನಿಧಿ

### ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ 2016 ರ ಮಾರ್ಚ್ ತಿಂಗಳಿನಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಡಾ.ಪಿ.ವಿನಾರಾಯಣ, ನಂ. ನಂಜಪ್ಪ, ಶ್ರೀಮತಿ ಕೆ.ಭಾರತಿ, ಶ್ರೀಮತಿ ಬಿ.ವಿ. ಪ್ರಭಾವತಿ, ಶ್ರೀ ಹೆಚ್. ಆರ್. ಪ್ರಶಾಂತ್, ಪ್ರೊ. ತೀ.ನಂ ಶಂಕರನಾರಾಯಣ, ಶ್ರೀಮತಿ ಪ್ರೇಮಾಭಟ್, ಶ್ರೀ ಎಂ.ಎಸ್. ರಾಮಪ್ರಸಾದ್

**ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 17.79 ಲಕ್ಷ**

## ಶುಭಾಶಯಗಳು

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ 2014-15ನೇ ಸಾಲಿನಲ್ಲಿ ನೋಂದಣಿಯಾಗಿ ಎಂ.ಫಿಲ್. ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳ ಹೆಸರುಗಳು :**

ಎಂ. ಮನೋಜ್,
ನವೀನ್ ಕುಮಾರ್ ಬಿ.ಸಿ.,
ಮಹೇಶ್ವರಿ ಜಿ.ಬಿ,
ರಾಜೇಶ್ವರಿ ಹಳ್ಳೂರು,
ರುದ್ರಮುನಿ ಪಿ.,
ಶ್ರೀಧರ್ ಆರ್.ಡಿ.,
ಸರಸ್ವತಿ ಎಸ್,
ಸರಸ್ವತಿ ಪಿ.ಎನ್.

## ತಿಮ್ಮಪ್ಪ ದಾಸ ಪ್ರಾಚೀನ ಹಸ್ತ ಪ್ರತಿ ಸಂಗ್ರಹಾಲಯ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದ ಬಹು ಸಂಖ್ಯೆಯ ಪ್ರತಿಗಳ ಮೂಲದಾನಿಗಳು ಪ್ರೊ. ಎಂ.ವಿ.ಸೀತಾರಾಮಯ್ಯನವರು ಮತ್ತು ಅವರ ಸೋದರ ಬಂಧುಗಳು.ಆ ನಂತರದ ವರ್ಷಗಳಲ್ಲಿ ಪ್ರತಿಷ್ಠಾನವು ಸಂಗ್ರಹಣಾ ಕಾರ್ಯವನ್ನು ಆಗಾಗ್ಗೆ ಕೈಗೊಂಡಿತು.ಈಗ ಹಸ್ತಪ್ರತಿ ಸಂಗ್ರಹಾಲಯದಲ್ಲಿ ಸರಿ ಸುಮಾರು 1250 ಓಲೆಗರಿ ಮತ್ತು ಕಾಗದ ಹಸ್ತಪ್ರತಿಗಳಿವೆ. ಕಳೆದ ಎರಡೂವರೆ ವರ್ಷಗಳಿಂದ ವೈಜ್ಞಾನಿಕವಾಗಿ ಓಲೆಗರಿ ಗ್ರಂಥಗಳನ್ನು ಸಂರಕ್ಷಿಸುವ ಮತ್ತು ಹಸ್ತಪ್ರತಿಗಳ ವಿವರವನ್ನು ವಿವಿಧ ಆಯಾಮಗಳುಳ್ಳ ಸೂಚಿ ರೂಪದಲ್ಲಿ ದಾಖಲಿಸುವ ಕಾರ್ಯನಡೆಯುತ್ತಿದೆ.ಪ್ರತಿಷ್ಠಾನದ ಸಂಗ್ರಹಾಲಯಕ್ಕೆ ವಿವಿಧ ಸ್ಥಳಗಳಿಂದ ಓಲೆಗರಿ ಹಸ್ತಪ್ರತಿಗಳು ದಾನ ರೂಪದಲ್ಲಿ ಬರುತ್ತಿವೆ. ಹಾಗೆಯೇ ಕೆಲವು ಹಸ್ತಪ್ರತಿಗಳು ನಮ್ಮಲ್ಲಿ ಸಂರಕ್ಷಣೆಗೊಂಡು, ಗ್ರಂಥದ ಸೂಚಿಯೊಂದಿಗೆ ಬಳಕೆದಾರರ ಕೈ ಸೇರುತ್ತಿವೆ.

ಪ್ರತಿಷ್ಠಾನದ ತಿಮ್ಮಪ್ಪದಾಸ ಪ್ರಾಚೀನ ಹಸ್ತಪ್ರತಿ ಸಂಗ್ರಹಾಲಯವು ಬಿ.ಎಂ.ಶ್ರೀ ಭವನದ ಮೊದಲ ಮಹಡಿಯಲ್ಲಿ ಆಧುನಿಕ ಸೌಕರ್ಯದೊಂದಿಗೆ 22ನೇ ಮಾರ್ಚ್ 2009ರಲ್ಲಿ ಮಾಜಿ ಕೇಂದ್ರ ಸಚಿವರಾದ ಸನ್ಮಾನ್ಯ ಶ್ರೀ ಎಂ.ವಿ. ರಾಜಶೇಖರನ್ ಅವರ ಸಂಸದರ ನಿಧಿಯ ಕೊಡುಗೆಯಿಂದ ನಿರ್ಮಾಣಗೊಂಡು, ಅವರಿಂದಲೇ ಉದ್ಘಾಟನೆಗೊಂಡಿತು.ಇದುವರೆಗೂ ಹಲವಾರು ಕಾಲೇಜುಗಳ ವಿದ್ಯಾರ್ಥಿಗಳು ಹಸ್ತಪ್ರತಿ ಸಂರಕ್ಷಣೆ ಮತ್ತು ತಿಳಿವಳಿಕೆ ಕುರಿತ ಅಲ್ಪಾವಧಿಯ ಕಾರ್ಯಾಗಾರಗಳಲ್ಲಿ ಭಾಗವಹಿಸುತ್ತಿದ್ದಾರೆ. ಹಲವು ಕಾಲೇಜಿನ ವಿದ್ಯಾರ್ಥಿಗಳು ಶೈಕ್ಷಣಿಕ ದೃಷ್ಟಿಯಿಂದ ಸಂಗ್ರಹಾಲಯಕ್ಕೆ ಕಾಲೇಜಿನ ವತಿಯಿಂದ ಒಂದು ದಿನ ಭೇಟಿ ನೀಡುತ್ತಾರೆ.

### 2016 ಮಾರ್ಚ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2016ರ ಮಾರ್ಚ್ ತಿಂಗಳಿನಲ್ಲಿ 36 ಗ್ರಂಥಗಳ ಶುಷ್ಕ ಶುದ್ದೀಕರಣ, 36 ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, 36 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, 40 ಗ್ರಂಥಗಳಿಗೆ ಅಟ್ಟೆಕಟ್ಟದ ಕಾರ್ಯ, 38 ಗ್ರಂಥಗಳಿಗೆ ಬಟ್ಟೆಕಟ್ಟುವ ಕಾರ್ಯ, ಹಾಗೂ 28 ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿರುವುದು.

ಇದಲ್ಲದೆ 146 ಗ್ರಂಥಗಳ ಗಣಕೀಕರಣ ಕಾರ್ಯವು ಸಹ ಮುಗಿದಿದೆ.

ಪ್ರತಿಷ್ಠಾನಕ್ಕೆ ಎರಡು ಓಲೆಗರಿಗಳ ಗ್ರಂಥಗಳು ಮತ್ತು ಒಂದು ಹಳೆಯ ಕಾಗದ ಮುದ್ರಿತ ತೆಲುಗು ಹಸ್ತಪ್ರತಿ ಸಂರಕ್ಷಣೆ ಮತ್ತು ದಾಖಲೀಕರಣದ ಸಲುವಾಗಿ ಸ್ವೀಕೃತವಾಗಿವೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting :30-03-2016

### "ಕಾಂತಾಸಂಮಿತಿ"

"ಹೀಗೆ ಮಹಾಕಾವ್ಯವು ನಮ್ಮಜೀವನವು ಸಾರ್ಥಕವಾಗುವದಾರಿಯನ್ನು ನಾವಾಗಿ ಹುಡುಕಿಕೊಳ್ಳುವಂತೆ ಪ್ರೇರಿಸುತ್ತದೆ.ಆದದ್ದರಿಂದಲೇ ಮಹಾಕಾವ್ಯಕ್ಕೆ"ಕಾಂತಾಸಂಮಿತಿ"ಎಂದು ಹೆಸರು ಬಂದಿದೆ.ಶಾಸ್ತ್ರಗಳು ನಮಗೆ ನೀನು ಹೀಗೆ ಮಾಡಬೇಕು, ಹಾಗೆ ಮಾಡಕೂಡದು-ಎಂದುಆಜ್ಞೆಕೊಟ್ಟು ಕಾನೂನು ಮಾಡುವಂತೆದಂಡನೆಯ ಭಯವನ್ನು ತೋರುತ್ತವೆ. ಆದದ್ದರಿಂದ ಅವು "ಪ್ರಭು ಸಂಮಿತಿ". ಪುರಾಣ ಇತಿಹಾಸಗಳು ಹಿಂದಿನ ಲೋಕಾನುಭವವನ್ನು ಉದಾಹರಿಸಿ ನೀತಿಯನ್ನು ಸೂಚಿಸುತ್ತವೆ. ಇದು ಸ್ನೇಹಿತನದಾರಿ, "ಸುಹೃತ್ಸಂಮಿತಿ". ಕಾವ್ಯವಾದರೋ ಪ್ರಿಯ ಸುಂದರಿಯಂತೆ. ಪ್ರಿಯಳು ತನ್ನಒಡೆಯನಿಗೆ ಹೀಗೆ ಮಾಡು, ಅದುತಪ್ಪುಎಂದು ಸೂಚಿಸುವುದೂ ಇಲ್ಲ. ಆಕೆ ತನ್ನ ಒನಪು ವೈಯ್ಯಾರಗಳಿಂದ ಪ್ರಿಯನ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುತ್ತಾಳೆ. ಆಕೆಯ ಮಧುರಕಟು ಮುಖಭಂಗಿಗಳಿಂದ, ಆಕೆಯ ಕಣ್ಣುಸನ್ನೆಗಳಿಂದ, ಆಕೆಯ ಮೂಗು ಹಾರಿಕೆ ತುಟಿತಿರುಚಗಳಿಂದ, ಅವನು ತಾನಾಗಿ ಆಕೆಯ ಇಂಗಿತವನ್ನು ಅರಿತು ಕೊಂಡವನಾಗುತ್ತಾನೆ; ತಾನಾಗಿ ಆಕೆಯ ಮನೋಗತವನ್ನು ಕಂಡುಕೊಂಡು ಆಕೆಗೆ ಸಂತೋಷವಾಗುವಂತೆ ತನ್ನ ನೈಜವಾದ ಉತ್ಸಾಹದಿಂದ ನಡೆದುಕೊಳ್ಳುತ್ತಾನೆ. ಕಾವ್ಯವು ಸ್ಪಷ್ಟವಾಗಿ ನೀತಿಯನ್ನು ಹೇಳುವುದಿಲ್ಲ."

–ಡಿವಿಜಿ ಅವರ ಷೇಕ್ಸ್ ಪಿಯರ್ ಗೆ ನಮಸ್ಕಾರ ಲೇಖನದ ಉದ್ಧೃತ ಭಾಗ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಡಾ. ಪಿ.ವಿ. ನಾರಾಯಣಅವರು ರಚಿಸಿರುವ ವಚನ ಸಾಹಿತ್ಯ-ಒಂದು ಪರಿಚಯ ಪುಸ್ತಕದ ಎರಡನೇ ಆವೃತ್ತಿ ಬಿಡುಗಡೆಗೊಂಡಿರುತ್ತದೆ.

"ಶರಣ ಸಾಹಿತ್ಯವನ್ನು ಅತ್ಯಂತ ಶ್ರದ್ಧೆಯಿಂದ ಹಾಗೂ ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಈಗಾಗಲೇ ಹಲವು ಕೃತಿಗಳನ್ನು ಕನ್ನಡಕ್ಕೆ ನೀಡಿರುವ ವಿದ್ವಾಂಸರಾದಡಾ. ಪಿ.ವಿ. ನಾರಾಯಣ ಅವರು ಬರೆದುಕೊಟ್ಟಿರುವ ಈ ಕೃತಿ"ವಚನ ಸಾಹಿತ್ಯ"ವನ್ನು ಅದರ ಬಹುಮುಖತ್ವದೊಂದಿಗೆ ಸಮರ್ಥವಾಗಿ ಪರಿಚಯ ಮಾಡಿಕೊಡುವ ಸ್ವರೂಪದ್ದಾಗಿದೆ" – ಗೊ.ರು.ಚನ್ನಬಸಪ್ಪ

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

ಅಚ್ಚಾದ ಪುಸ್ತಕ

ತೆರೆದ-ಅಂಚೆ



ಶ್ರೀಮತಿ/ಶ್ರೀ..........................................................................

..........................................................................

..........................................................................

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭